# ಸಖಿ ಶಾರದೆ

## ಚಿತ್ರ ವಿಚಾರ ಕೃತಿ



ಜೀವನ ಪ್ರೀತಿ

ISBN 978-93-5773-793-7
9 789357 737937

ಜೀವನ ಪ್ರೀತಿ ಮಾಲಿಕೆ ೬

# ಸಖಿ ಶಾರದೆ

## ಚಿತ್ರ ವಿಚಾರ ಕೃತಿ

ಅಂಕುರ



# ಜೀವನ ಪ್ರೀತಿ ಮಾಲಿಕೆ ೬
# ಸಖಿ ಶಾರದೆ_ಚಿತ್ರ ವಿಚಾರ ಕೃತಿ_ಅಂಕುರ

Jeevana Preeti Maalike 6

Sakhi Sharade chitra vichara kruti - Ankura

Dr. Ravishankar A K




ಪ್ರಕಾಶನ : ಜೀವನ ಪ್ರೀತಿ
ಅಳಿಲುಘಟ್ಟ
ಗುಬ್ಬಿ ತಾಲ್ಲೂಕು
ತುಮಕೂರು ಜಿಲ್ಲೆ
ಕರ್ನಾಟಕ ೫೭೨೨೨೨

Publication : Jeevana Preeti
Alilughatta
Gubbi Taluk
Tumkur District
Karnataka - 572222




ಪ್ರಕಟಣೆ : ೧೨.೧೨.೨೦೨೨
ಐ.ಎಸ್.ಬಿ.ಎನ್ ಸಂಖ್ಯೆ : ೯೭೮.೯೩.೫೭೭೭.೫೯೯.೧

**Impression : 12.12.2022**
**ISBN Number :978-93-5777-599-1**

## ಸಖಿ ಶಾರದೆ




ಪ್ರೀತಿಯ ಸಖಿ

ಕಾವ್ಯ

ಅವರಿಗೆ

# ಸಖಿ ಶಾರದೆಯ ವಿಚಾರ

ಮನುಷ್ಯನಿಗೆ ತನ್ನ ಹುಡುಕಾಟವು ಅರಿವಾದಾಗ ಆಲೋಚನೆ ಬೆಳೆದಿದೆ. ತನ್ನ ಸುಖವು ಸಮಾಜದ ಸುಖವೆಂಬ ಅರಿವು ಮೊದಲು ಎಚ್ಚರವಾಗಿ, ನಂತರ ತನ್ನನ್ನು ಕಳಚಿಕೊಳ್ಳುತ್ತಾ ಸಮಾಜಕ್ಕೆ ತನ್ನನ್ನು ಅರ್ಪಿಸಿಕೊಳ್ಳುವ ಗುಣ ಬೆಳೆಯುತ್ತದೆ. ಈ ಗುಣದಲ್ಲಿ ತಾನು ಎಂಬುದೇ ಸಖಿ ಭಾವ. ಈ ಸಖಿ ಭಾವಕ್ಕೆ ಇಲ್ಲಿ ಕೆಲವು ವಿಚಾರಗಳಿವೆ. ಇವು ಉಪದೇಶಗಳಲ್ಲ. ತನ್ನ ಆತ್ಮ ಚಿಂತನ ವಿಚಾರಗಳು. ಇವುಗಳಿಗೆ ನಿಮ್ಮ ವಿಚಾರ ಸಾರಗಳನ್ನು ಸೇರಿಸಿ, ಕೈಬಿಟ್ಟು, ಮುಂದುವರೆಸುತ್ತಾ ಓದಿಕೊಳ್ಳಬಹುದು. ಅಳವಡಿಸಿಕೊಳ್ಳಬಹುದು. ಅದೇ ಜೀವನಪ್ರೀತಿ. ನಮಗೆ ಇನ್ನೊಬ್ಬರು ಏನು ನೀಡಿದ್ದಾರೆ ಎನ್ನುವ ಮೊದಲು ಇನ್ನೊಬ್ಬರಿಗೆ ನಾವು ಏನು ನೀಡಿದ್ದೇವೆ ಎನ್ನುವ ಭಾವ ಮೊದಲು ಮೂಡಿದರೆ ನಮ್ಮ ನಮ್ಮ ಜೀವನಪ್ರೀತಿ ಸಾರ್ಥಕ. ಈ ನಮ್ಮೊಳಗಿನ ಜ್ಞಾನವೇ ಈ ಸಖಿ. ಆದ್ದರಿಂದ ಈ ಸಖಿಯನ್ನು ಶಾರದೆಯಾಗಿ ಕಾಣಬಹುದು. ತನ್ನೊಳಗೆ ಹೊಸ ಸೃಷ್ಟಿಗಳ ದೃಷ್ಟಿಸಬಹುದು. ಇಲ್ಲಿ ನೂರು ಚಿತ್ರ ವಿಚಾರಗಳಿವೆ ಅವೆಲ್ಲವೂ ನಿಮ್ಮ ಮನದ ಚಿಂತನೆಗಳೇ ಆಗಿವೆ. ಸ್ವೀಕರಿಸಿ, ಬದುಕನ್ನು ಒತ್ತಡಗಳ ನಡುವೆಯೂ ಸಮಾಧಾನಗೊಳಿಸಿಕೊಳ್ಳೋಣ ಬನ್ನಿ.

ಇರುವಷ್ಟು ಬಾಳ್ವೆಯನು
ಬಂದಂತೆ ಸ್ವೀಕರಿಸಿ
ಬದುಕುವುದು
ಬದುಕಿನ ಸಾರ್ಥಕ ಕಾರ್ಯ.
ಅಂಕುರ

ಸಖಿ,
ನೀನು ನನ್ನಂತೆ
ಆತ್ಮಬಂಧು
ನಾನು ಅದರೊಳಗೆ
ಭಾವ ಪೂರ್ಣ
ಬಿಂದು
ನೀನು ಹೆಣ್ಣು ಅಂದರೆ ಶಾರದೆ

ಪ್ರತಿ ಸೃಷ್ಟಿಯೂ ಹೊಸ
ದೃಷ್ಟಿಗಳನ್ನು ಜಗತ್ತಿಗೆ
ಪಸರಿಸುತ್ತಾ ಸಾಗುತ್ತದೆ.
ಸೃಷ್ಟಿ ಇಲ್ಲಿ
ಆಕಸ್ಮಿಕವೂ ಅಲ್ಲ,
ಅನಿವಾರ್ಯವೂ
ಅಲ್ಲ
ಇಲ್ಲಿನ ಅರ್ಥಪೂರ್ಣ
ಕಾರ್ಯಕ್ಕಾಗಿ
ಜೀವಾತ್ಮಗಳ ಕೊಡುಗೆ.
ವಿಜ್ಞಾನದಿಂದ
ಇದೊಂದು ಜೀವ!
ಕಲೆಯಿಂದ
ಅರ್ಥಪೂರ್ಣ ಭಾವ.



ಸಖಿ,
ಪ್ರತಿ ಕ್ಷಣವೂ
ನಿನ್ನ ಸೃಷ್ಟಿಯ ಸ್ವರೂಪ
ಪ್ರತಿ ಮನವೂ
ನಿನ್ನ ದೃಷ್ಟಿಯ ಪ್ರದೀಪ
ನಾನು ಎಂಬುದೇ ಕಾರಣ
ನೀನು ಎಂಬುದೇ ನಿಜದ ತೋರಣ.
- ಅಂಕುರ

ಸಖಿ,
ಇರುವಲ್ಲೆ ಬೇರೂರಿ
ಬಳ್ಳಿಯಂತಬ್ಬಿ
ನಂಬಿಕೆಯ ದೃಢತೆಯಲಿ
ಪ್ರೀತಿಯ ಹಸಿರು ತುಂಬಿ
ಮೆಲ್ಲನೆ ಅರಳುವ ಮಲ್ಲಿಗೆ
ನಿನ್ನ ನಿಷ್ಕಲ್ಮಶಕೆ
ಶರಣು.
-ಅಂಕುರ



ಆಯ್ಕೆಗಳು
ಅನಿವಾರ್ಯ
ಆಗುವುದಕ್ಕಿಂತ
ಅಗತ್ಯಗಳಾದರೆ
ಬಾಳ್ವೆಯ ಸ್ವೀಕಾರವು
ತಿಳಿಯುತ್ತದೆ
ಪ್ರತಿ ಆಯ್ಕೆಯೂ
ಮೌಲ್ಯ ಪಡೆಯುತ್ತದೆ.







ಏನು ಸವಿಯೋ ಅದನೆ ಕುಡಿ
ನಿನ್ನ ರುಚಿಯ ಹದವ ಹಿಡಿ
ನನ್ನನೇನು ಕೇಳುವೆ
ಆದರೂನು ಹೇಳುವೆ...
- ದ.ರಾ ಬೇಂದ್ರೆ



ಪ್ರೇಮದ ಮನಸ್ಸಿನಲ್ಲಿ ಆಸೆಗಳಿರುವುದಿಲ್ಲ
ತ್ಯಾಗ ಹಾಗೂ ಹೊಂದಿಕೆಗಳಿರುತ್ತವೆ.
ವಿಶ್ವವೇ ಪ್ರೇಮದ ರಾಗವನ್ನು ನುಡಿದಿದೆ
ನಾವು ಅದನ್ನು ತಿಳಿದು ಬಾಳ್ವೆ
ನಡೆಸಬೇಕಿದೆ.



ಸಖಿ,
ಪ್ರೇಮವು ಹಸಿಯಾದ
ಆಹ್ವಾನ!
ನಿನ್ನ ಇರುವಿಕೆಯೇ
ನೆಮ್ಮದಿಯ ಸೋಪಾನ.
-ಅಂಕುರ

ಜಗತ್ತಿನಲ್ಲಿ ಅತಿ ಹೆಚ್ಚು ನಡೆದ
ನಡೆಯುತ್ತಿರುವ ಯುದ್ಧಗಳೆಂದರೆ
ಅದು ಮೌನಯುದ್ಧಗಳೇ ಆಗಿವೆ
ಇಲ್ಲಿ ಗೆದ್ದರೆ, ಶಬ್ದಗಳನ್ನು ಗೆಲ್ಲುವುದು ಕಷ್ಟವಲ್ಲ.





ಸಖಿ,
ನಿನ್ನ ಮೌನವೂ
ಎನಗೆ ಸುಖೀಕಾವ್ಯ
-ಅಂಕುರ

ಸತ್ಯಗಳನ್ನು
ಹೇಳಿಬಿಡೋಣ
ಅವಕಾಶವಾದಿ
ಆಗುವುದಕ್ಕಿಂತ
ಸತ್ಯವೇ
ಅರ್ಥಪೂರ್ಣ ಬದುಕು.



ಸಖಿ ಶಾರದೆ
5

ಸಖಿ,

ಅನಿಸಿದ್ದನ್ನು
ಹೇಳುವುದು ನನ್ನ ರೀತಿ
ಮುನಿಸಾಗುವುದೋ...
ಕಠಿಣವಾಗುವುದೋ...
ಅದು ಸತ್ಯದ ಭೀತಿ.
- ಅಂಕುರ



## ಪ್ರೇಮ ಮನದ ತಪಸ್ಸು
## ಪ್ರೀತಿ ಅಭಿವ್ಯಕ್ತಿಯ ಕಾಣ್ಕೆ

ನನ್ನ ಪ್ರೇಮದ ಕಾವ್ಯ
ಬರೆದಂತೆ ಬಾಳಿಹುದು
ತುಂಬಿಕೋ ಸಹೃದಯ
ನಾ ಪ್ರೇಮ ತಪಸ್ವಿ
-ಅಂಕುರ



ಎಲ್ಲಾ
ನಂಬಿಕೆಗಳೂ
ಪ್ರೇಮದ
ಸಂಕೇತಗಳೇ ಆಗಿವೆ.
ರೂಪ – ಸ್ವರೂಪ
ವಿಭಿನ್ನ.



ಸಖಿ,
ನನ್ನ ಪ್ರೇಮದಲಿ
ನಿನ್ನ ನಂಬಿಕೆಯೆ
ಚಿರ ಆಸ್ತಿ.
-ಅಂಕುರ

ತೆರೆದ ಮನ ಸ್ವೀಕಾರ
ಅರಿತ ಮನ ಮಧುಕರ
ಜೀವನ ಪ್ರೀತಿಯೇ ಇದರ ಸಾರ

ಸಖಿ,

ಕೇಳಿಸಿಕೊಳ್ಳುವ ಕಿವಿ
ಆಲೋಚಿಸುವ ಮನಸ್ಸು
ಸಂವಾದಿಸುವ ಹೃದಯ

ಇವು ಜೀವನಪ್ರೀತಿಯ ಗುಟ್ಟು
-ಅಂಕುರ



## ಜೀವನವು ಅನುಭವ ಕಥನ
## ಪ್ರತಿಪುಟವೂ ಅದರ ಸ್ವರೂಪ



ಸಖಿ,
ಜೀವನವೆಂದರೆ
ರಸ ಸ್ವಾದದಂತೆ
ಆಸ್ವಾದನೆಯಂತೆ ರುಚಿ
ಮನಸ್ಸಿನಂತೆ ಶುಚಿ.
- ಅಂಕುರ



ಕ್ಷಮಿಸು,
ಬದುಕು
ಸುಂದರ ನೆಯ್ಗೆ
ಬೇಧಿಸಲಾಗದ
ಬಲೆಯಲ್ಲ,
ಕಾಪಾಡುವ ಕಲೆ.



ರಾಜಿಯಾಗುವುದೆಂದರೆ...
ನಮ್ಮನ್ನು ನಾವು
ಕಂಡುಕೊಳ್ಳುವ ಪರಿ.
- ಅಂಕುರ

# ಸಖ ಹಾಗೂ ಸಖಿಯ ಮಿಲನದ ಮಧುರ ಸಂಬಂಧವೇ ಬಾಳ್ವೆಯ ಸಂಗೀತ

ಸಖಿ,
ನಿನ್ನ ಸ್ವರಕೆ
ನನ್ನ ದನಿಯು
ನುಡಿಸೋಣ!
ಬಾ...
-ಅಂಕುರ



ಬದುಕು
ಚಿತ್ರದಂತೆ.
ಬರೆದವರೇ
ನಮ್ಮ ನಂಬಿಕೆಯ
ಕಾರ್ಯ.
ಈ ಬದುಕಿನ
ಫಲವೇ
ಬಣ್ಣದ ಬಯಲು.

ಸಖಿ,
ಮಧುರ ಭಾವಗಳನ್ನು
ಚಿತ್ರದಂತೆ
ಮೂಡಿಸುವಲ್ಲಿ
ನೀ ಕುಂಚವೂ, ನಾ ಕುಂಚಕಾರನೂ
ಮೂಡಿದ್ದು ಇಬ್ಬರೂ...
- ಅಂಕುರ





ತೆರೆದಷ್ಟೂ ಬೆಳಕು
ಮುಚ್ಚಿದಷ್ಟೂ ಕತ್ತಲು
ಬೆಳಕು ಕಲಿಸುತ್ತದೆ
ಕತ್ತಲು ಅನುಭವಿಸುತ್ತದೆ












ಹುಡುಕದಿರು ಮನವೆ
ಸತ್ಯ ಸ್ಪಷ್ಟವಾಗಿಯೇ ಕಾಣುತ್ತದೆ

ಸಖಿ,

ಇರುವ ಪ್ರೀತಿಯಲಿ
ನೂರು ಕೊರತೆಗಳೇನು!
ಬರುವ ಪ್ರೀತಿಯಲಿ
ಏನೂ ಇರುವುದಿಲ್ಲವೇನು!

ನೆನಪಿರಲಿ,
ನೀ ಬೀಸುವ
ಗಾಳಿಗಿಂತ!
ನಿನಗೆ ಬೀಸುವ
ಗಾಳಿಯೇ ಹಿತ!
- ಅಂಕುರ





ಪ್ರೀತಿಯ ಸಂಕೇತಗಳೇ ಹೀಗೆ,
ಶಾಶ್ವತ ಸ್ಪರ್ಶಗಳಾಗಿ
ಬೆಚ್ಚನೆಯ ಕಾವುಕೊಡುತ್ತವೆ





ಸಖಿ,
ನೀ ಮೂಡಿಸಿದ ರಂಗೋಲಿ
ನನ್ನ ಪ್ರೇಮದ ಗುರುತು
ನಾ ನುಡಿಸಿದ ಸವಿಲಾಲಿ
ನಿನ್ನ ಮಧುರ ಋಜುವಾತು
-ಅಂಕುರ





ಅಖ್ಯಾನವೂ
ವ್ಯಾಖ್ಯಾನವೂ
ಮನಸ್ಸಿನಿಂದಲೇ
ನಿರ್ಮಿತಿ ಹಾಗೂ ಅವನತಿ
ಹೆಣ್ಣಿಗೂ ಗಂಡಿಗೂ

ಸಖಿ,
ಹೆಣ್ಣೆಂದರೆ,
ನನ್ನೊಳಗಿನ ಕಾಯ.
ಪ್ರತ್ಯೇಕಿಸಿದಷ್ಟೂ
ಅಸಮಾನತೆ
ಎದ್ದು ಕಾಣುತ್ತದೆ.
- ಅಂಕುರ



ಸಖಿ ಶಾರದೆ
17

ಸಖಿ,
ತಂಗಾಳಿಯ ಪ್ರಯಾಣದಲ್ಲಿ
ನಾನು ಅಂಬಿಗ
ನೀನು ನನ್ನೊಳಗಿನ ನಂಬಿಗ
ಅಂಕುರ



**ಪರಿಶುದ್ಧತೆಯನ್ನು**
**ಗ್ರಂಥದಿಂದಗಾಗಲೀ**
**ಬೋಧನೆಯಿಂದಾಗಲಿ**
**ಹುಡುಕಲಾಗದು**
**ಅದು ಅಂತರ್ಭಾವನ**

ಸಖಿ,
ಪ್ರೇಮವೆಂದರೆ
ಕಾಣುವ ಸೊಗಸು...!
ನೋಡುವ ನೋಟಕೆ
ಪರಿಶುದ್ಧ ಮನದ
ಸ್ಪರ್ಶ ಬೇಕು.
- ಅಂಕುರ





**ಪ್ರಕೃತಿಯು ಪ್ರಯೋಗಶಾಲೆ**
**ಜೀವವೇ ವಿಜ್ಞಾನ**
**ಜೀವಿಯೇ ವಿಜ್ಞಾನಿ**

ಸಖಿ,
ಪ್ರೇಮವು
ಪ್ರಕೃತಿಯೊಳಗಿನ ಸಂಸ್ಕೃತಿ
ಪ್ರತಿ ಜೀವಿಯೂ
ಅದರ ಸತ್ಯಾನ್ವೇಷಣೆಯ
ಸಹಜ ಆಕೃತಿ.
-ಅಂಕುರ

ಸೃಷ್ಟಿ - ದೃಷ್ಟಿ
ಪರಿಶುದ್ಧ ನೌಕೆ
ಮನದ
ಸವಾರಿಗೆ ಸಿದ್ಧತೆ ಬೇಕು

ನೀನು ನಂಬಿಕೆ
ನಾನು ವಿಶ್ವಾಸ
ಕಾಣುವುದೇ ತೃಪ್ತಿ

ಸಖಿ,
ಪ್ರೇಮವೆಂದರೆ
ಕಾಣುವ ಸೊಗಸು...!
ನೋಡುವ ನೋಟಕೆ
ಪರಿಶುದ್ಧ ಮನದ
ಸ್ಪರ್ಶ ಬೇಕು.
- ಅಂಕುರ

## ತನುವಿನ ತೃಪ್ತಿಯು ಮನಕೆ ಚಿರಶಾಂತಿ

ಸಖಿ,

ಎನ್ನರಸಿ, ತನ್ನರಸಿ,
ತಾನೇ ತಾ ಬರುವ ತನಕ,
ತಾನು ಕಾಯಬೇಕು,
ಈ ತನುವು ಮಾಯಬೇಕು.
-ಅಂಕುರ

ಸಖಿ,



ಬಡತನಕ್ಕೆ ಪ್ರೀತಿ ಬೇಕಾಗಿದೆ

- ಅಂಕುರ





ಬಡತನವನ್ನು ಎಲ್ಲರೂ ಅನುಭವಿಸಬಹುದು
ಶ್ರೀಮಂತಿಕೆಯು ಅಸಾಧ್ಯ

ಸಖಿ,

ಕವಿತೆ ಕರಗುವುದೇ..!
ನನ್ನೆದೆಗೆ ಇಳಿದ
ಆ ಬೆರಗಿನ ಸವಿಯಲ್ಲಿ...
ಕರಗಿದಷ್ಟೂ ಸವಿಯು ತಾನೇ!
ಹೊಸ ರುಚಿಯ ಸ್ವಾದದಲ್ಲಿ...
- ಅಂಕುರ

ರುಚಿ
ಸ್ವಾದ
ಅರ್ಥಪೂರ್ಣ ಹೋರಾಟ

ಸೋಲು
ಕಲಿಸುವಷ್ಟು ಪಾಠಗಳನ್ನು
ಗೆಲುವು ಕಲಿಸಲಾರದು



ಸಖಿ,

ಸೋಲುವುದನ್ನು
ಕಲಿಯೋಣ ಬಾ..
ಗೆಲುವಲ್ಲಿ ಸರಿಯಷ್ಟೇ
ನಮ್ಮ ಹಿರಿಮೆಯ ತವಕ.
ಸೋಲಿನಲಿ ತಪ್ಪುಗಳು
ನಮಗೆ ನಾವೇ ಅರ್ಥ ಪದಕ.

ನಾ ನಿನಗೆ ನೀ ನನಗೆ
ಸೋಲುವುದೇ ಗೆಲುವೆಮಗೆ
-ಅಂಕುರ



ಶಾಶ್ವತವಾಗಿ
ಉಳಿಯುವ ಪ್ರೀತಿಯಲ್ಲಿ
ಎಲ್ಲವನ್ನೂ ಮೀರುವ ಗುಣವಿದೆ



ಸ್ವಲ್ಪ ಆಲೋಚಿಸಿ,
ಕಳಚುವ ಮುನ್ನ
ಮತ್ತೆ ಕೂಡುವ ಕಾರ್ಯವಿದೆ

ಸಖಿ,
ಕಳಚಿದ ಕೊಂಡಿಗಳು
ಮತ್ತೆ ಮತ್ತೆ
ಕೂಡುತ್ತವೆಯೆಂದರೆ
ನನಗೂ ನಿನಗೂ
ಕಳೆದ ಜನ್ಮದ
ಭವಾವಳಿಯ
ನಂಟು
ಇರಲೇಬೇಕು
-ಅಂಕುರ






ಸಖಿ,

ನಿನ್ನ ಕಣ್ಣೋಟದಲಿ
ತುಂಬಿರುವ
ನಂಬಿಕೆ-ಪ್ರೇಮ-ಮಮತೆಗಳ
ಅವಧರಿಸು ನೀ
ಈ ಅವತಾರ ಪುರುಷನಿಗೆ...
-ಅಂಕುರ





ಸಖಿ,
ಸಖನೊಲಮೆಯ
ಮಲ್ಲಿಗೆಯೂ
ಗುಲಾಬಿಯೂ
ಸಾಕಲ್ಲವೇ...
ಪ್ರೇಮಭಾರಕೆ
ಮಧುರ ಸಾರಕೆ...
ನಿನ್ನ ಮುಡಿ ಮಡಿಯು
ಎನ್ನ ನಡೆ ನುಡಿಯು
ಪರಿಮಳವೇ ತುಂಬಿರಲಿ
ಸದಾ ನಿತ್ಯ ನೂತನ..
_ ಅಂಕುರ

ಗಂಡು - ಹೆಣ್ಣು
ಜೀವ ಸೃಷ್ಟಿಯ ಎರಡು ಪಿಂಡಗಳು
ಶಕ್ತಿ - ಯುಕ್ತಿಯ ಮೇಲೆ
ಕಾರ್ಯ ಕಾರಣವಿದೆ

ಸಖಿ,
ಸಾಂಗತ್ಯ
ಇಲ್ಲದ
ಆಧಿಪತ್ಯ ನಮ್ಮದು.
ಗಂಡೆಂಬ ಕೋಡು
ಹೆಣ್ಣೆಂಬ ಬೀಡಿನಲಿ
ಮೂಡಬಹುದೇ?
ಒಲವಿಲ್ಲದ ಚೆಲುವು
ಸುಮ್ಮನೆ ಕಾಮದಲಿ
ಕಾಡಬಹುದೇ!

ಬಾ ಬೇಗ
ಭೇದವಳಿಸಿ ನಾದವಾಗೋಣ!
ಹೊಸ ಗಾದೆ ಮಾತು ನಾವು...
-ಅಂಕುರ

## ಅವಳು
## ಪ್ರತೀಕ ಹಾಗೂ ಪ್ರತಿನಿಧಿ



ಸಖಿ,
ಅವಳೆಂದರೆ...
ಗರಿಕೆಯ ಹಾಗೆ,
ಕಿತ್ತರೂ ಚಿಗುರುವ
ಜೀವಂತ ಕಾವ್ಯ
ಕಸವೆಂದರೂ ಪೂಜಿಸುವ
ಅಲಂಕಾರ ದ್ರವ್ಯ
- ಅಂಕುರ

ಸಖಿ,

ಅವಳೆಂದರೆ...
ಗರಿಕೆಯ ಹಾಗೆ,
ಕಿತ್ತರೂ ಚಿಗುರುವ
ಜೀವಂತ ಕಾವ್ಯ
ಕಸವೆಂದರೂ ಪೂಜಿಸುವ
ಅಲಂಕಾರ ದ್ರವ್ಯ.
- ಅಂಕುರ

ಸ್ತ್ರೀ ಸಾಹಿತ್ಯ ವಿಮರ್ಶಿಸಲು
ಈ ಸಾಲುಗಳು ಸಹಾಯವಾಗಬಹುದು

ಸಖಿ ಶಾರದೆ
30




ಸಖಿ,
ನೀ
ನನ್ನೊಳಗಿನ
ವಿಶ್ವಾಸದ ವಿಶ್ವ!
ನಾ
ನಿನ್ನೊಳಗೆ
ಅಣು ಜೀವಿ!
ನಿನ್ನ ಕಾಣಲು
ನನ್ನ ನಿತ್ಯ ಪಯಣ...
-ಅಂಕುರ



**ಮನಸ್ಸು ತೆರೆದಷ್ಟೂ**
**ಅಕ್ಷರಗಳು ಮಾತಾಡುತ್ತವೆ**

ಸಖಿ,
ಮತಿದೀವಿಗೆಯ
ಮಹತಿ
ಸದಾ ಜೊತೆಯಿರುವ
ಸಂಗಾತಿ
ದಾರಿ ತೋರುವ
ಹಣತಿ
ಓ ಎನ್ನ ಆತ್ಮಸಖಿ
ಕಣ್ಣು ತೆರಸಿದ
ಸಂಸ್ಕೃತಿ
ನಿನಗೆ ಪೂರ್ಣ ಶರಣು.
-ಅಂಕುರ

ಪ್ರೀತಿ ಬಾಹ್ಯದ ಹುಡುಕಾಟವಲ್ಲ
ಅಂತರಂಗದ ಸಂಶೋಧ



ಸಖಿ,
ಭಕ್ತಿ ಹಳತಾದರೇನು
ಭಾವ ಹಳತಲ್ಲ...
ಶಕ್ತಿ ಹಳತಾದರೇನು
ಮುಕ್ತಿ ಹಳತಲ್ಲ...
ಕಣ್ಣು ಹಳತಾದರೇನು
ನೋಟ ಹಳತಲ್ಲ...
ಚರಿತ್ರೆ
ಮಾತಾಡುತ್ತಲೇ
ಚಹರೆ
ಬದಲಾಗುತ್ತದೆ.
ವಾಸ್ತವದ ಬೇರಿನಲ್ಲಿ
ನನ್ನ-ನಿನ್ನ ಪ್ರೇಮ
ಅಂಕುರಿಸುತ್ತದೆ.
-ಅಂಕುರ



ಸಖಿ,
ಕಣ್ಣನು ತೆರೆದು
ಭಾವದಿ ಬೆರೆತು
ಮನವನದ್ದಿ
ಈ ನಿಸರ್ಗವನು
ನೋಡು...
ಕಣ್ಣಿದ್ದೂ ಕುರುಡಾಗದಿರು
ಮನಸಿದ್ದೂ ಬರಡಾಗದಿರು
ದೇವರಿರುವನು
ಧರಿತ್ರಿಯಲ್ಲಿ
ಕಾಣುವ ಧೈರ್ಯ ಮಾಡೋಣ ಬಾ!

-ಅಂಕುರ



ಸಖಿ,
ಬದುಕಿನ
ಅರ್ಥಗಳು
ಅಧಿಕಾರದ ಕೈಯಲ್ಲಿವೆ,
ನಾವೂ
ನಮ್ಮ
ಬದುಕನ್ನು
ಮಾರುವುದು ಬೇಡ,
ಸಾಧ್ಯವಾದಷ್ಟು
ಸಾರೋಣ!
ಸ್ವಲ್ಪವಾದರೂ
ಸಾರ್ಥಕ ಪಡೆಯೋಣ ಬಾ...

-ಅಂಕುರ



ಸಖಿ,
ಅರಣ್ಯವೋ
ನಿಬಿಡ ಬ್ರಹ್ಮಾಂಡ
ಅಯನವೋ
ಸೂತ್ರದಾಟ
ಬದುಕೆಂಬುದೂ
ಹೀಗೆ...
ಅರಣ್ಯ ಭೇದಿಸಲು
ಅಯನದರ್ಥವ
ಹುಡುಕಬೇಕು
ಸುಖ-ದುಃಖ
ಪಲ್ಲವಿಯ ನುಡಿಸಬೇಕು.
-ಅಂಕುರ

ಸಖಿ,
ಸೃಷ್ಟಿ ಪಥದಲ್ಲಿ
ಹಿಂದೂ
ಮುಂದೂ
ಸಾಗುತ್ತಿದ್ದೇವೆ
ಬದಲಾವಣೆಗಳನ್ನು
ಒಪ್ಪಿಕೊಳ್ಳಲೇಬೇಕಿದೆ.
ನಾಳೆಯ
ಸೃಷ್ಟಿಗೆ
ಜಗತ್ತಿನ ದೃಷ್ಟಿಯೇ
ಬದಲಾಗಿದೆ.
ಬಾ ಕೈ ತಾ...
.ಅಂಕುರ

ಸಖಿ,
ಕಣ್ತೆರೆದು ನೋಡು
ಶ್ರೀಮಂತರಾಟದಲಿ
ಬಡವರ
ಸ್ಥಿತಿ-ಗತಿಯ
ಚಕ್ರಗತಿ
ಸಾಗುವ ದಾರಿಯೇ
ಸಾವಿನ ಶಸ್ತ್ರವಾಗಿದೆ.
ಇದು
ಕಲ್ಪನೆಯ ಕಥೆಯಲ್ಲ
ಕ್ರೂರ ಹಿಂಸೆಗೆ
ಕೋಡು ಮೂಡಿದೆ.
ಈಗ
ನಿನ್ನ ಕಣ್ಣೀರಿಗೆ ಅರ್ಥವಿಲ್ಲ.
-ಅಂಕುರ

ಸಖಿ,
ಕೆಲವರಿಗೆ
ಮನುಷ್ಯ,
ಧರ್ಮ,
ಸಮಾಜವನ್ನು
ಸದಾ
ಕೆಟ್ಟವರ ಮೂಲಕವೇ
ನಿರ್ಧರಿಸುವಂತೆ
ವಿದ್ಯೆ ದೊರಕಿದೆ

"ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್!" - ಅರ್ಜುನ
(ಭಗವದ್ಗೀತೆ)
(ಅಯ್ಯೋ! ಕಷ್ಟವೇ! ಬುದ್ಧಿವಂತರಾಗಿದ್ದೂ ಸಹ ನಾವುಗಳು ಮಹತ್ತಾದ
ಪಾಪವನ್ನು ಮಾಡಲು ಸಿದ್ಧರಾಗಿದ್ದೇವಲ್ಲ!)

ಸಖಿ,
ಲೌಕಿಕದೊಳಗೆ ಇದೊಂದು
ಅಲೌಕಿಕ ಯುದ್ಧ
ಎಲ್ಲಾ ಕಡೆಯೂ
ಅಲಿಪ್ತ ನೀತಿಯ ಆರಾಧನೆ
ಸೃಷ್ಟಿ ಸಾರೋಟದಲ್ಲಿ
ವಿನಾಶದ ಪದ್ಮಾಸನ
ಇತಿಹಾಸದ ಬೇರುಗಳು
ವರ್ತಮಾನದಲ್ಲಿ
ಚಿಗುರೊಡೆದು, ಬೆಳೆದು
ಐತಿಹ್ಯವಾಗುವ ಅನಾಹುತ.

.ಅಂಕುರ

ಸಖಿ,
ಮನಸು
ಜಾಜಿ
ಮಲ್ಲಿಗೆಯಂತಿರಲಿ
ಸೌಂದರ್ಯವೂ
ಸುವಾಸನೆಯೂ
ಔಷಧೀಯವೂ...
ಕಟ್ಟಿ ಪೋಣಿಸುವ
ಕಬ್ಬದೆಣಿಗೆಯಲಿ..

ಇರುವುದೊಂದೇ ಮನಸು
ಹಿತವಾಗಿಸೋಣ!
ನೀ ಯಾವಾಗಲೂ
ಜಾಜಿ ಮಲ್ಲಿಗೆ,
ಸೂಜಿ ಮಲ್ಲಿಗೆ,
ಮುತ್ತು ಮಲ್ಲಿಗೆ ,
ಶಂಕರ ಪುರ ಮಲ್ಲಿಗೆ...
ಅರಳುವ ಮುನ್ನ,
ಅಲಂಕರಿಸುವೆ
ಆತ್ಮ ಸೌಂದರ್ಯದಲಿ.
.ಅಂಕುರ

ಒಲವೆಂಬ ಹೊತ್ತಿಗೆಯ ಓದ ಬಯಸುತ ನೀನು
ಬೆಲೆ ಎಷ್ಟು ಎಂದು ಕೇಳುತಿಹೆಯ ಹುಚ್ಚ
ಹಗಲಿರುಳು ದುಡಿದರೂ ಹಲ ಜನುಮ ಕಳೆದರೂ
ನೀ ತೆತ್ತಲಾರೆ ಬರಿ ಅಂಚೆ ವೆಚ್ಚ!     ದ.ರಾ. ಬೇಂದ್ರೆ





ಸಖಿ,
ಜೀವನವೊಂದು
ತೆರೆದ ಅಂಚೆ
ನೀ ತುಂಬು ನಿತ್ಯವೂ
ಪ್ರೇಮಪತ್ರಗಳ
ನಾ ನಿನ್ನ ಪ್ರೀತಿ ಪಾತ್ರ;
-ಅಂಕುರ

-ಸಖಿ ಶಾರದೆ



ಸಖಿ,
ನೀ ಕಾಣುವ ಒಳಿತು
ಮಿತ ಭಾಷೆಯ ಗುರುತು
ನಾ ನಿನ್ನ ಬಾಲ್ಯಸಿರಿ
ಕಲಿಯೋಣ ಮುಗ್ಧರಾಗಿ
-ಅಂಕುರ

**ಕಲಿಕೆಯು ಪ್ರಕೃತಿಯೊಳಗಿನ ನಿತ್ಯ ಅನುಸಂಧಾನ**

-ಸಖಿಸಾರ

ಇರುವಿಕೆಯ ಆನಂದವು ಕುತೂಹಲದ ಕಾಣ್ಕೆ

ಸಖಿ,
ಒಡನಾಟವಿಲ್ಲದ ಒಲವು
ಕಬ್ಬದ ಮುನ್ನ ಮೂಡುವ
ಕವಿಸಮಯದಂತೆ
ನಾ ನಿನ್ನೊಲವ ಶಿಶು
-ಅಂಕುರ

-ಸಖಿಸಾರ

'ನಹಿ ಜ್ಞಾನೇನ ಸದೃಶಂ'
ಜ್ಞಾನಕ್ಕೆ ಸಮಾನವಾದುದು ಯಾವುದು ಇಲ್ಲ

ಜ್ಞಾನ ಯಾವ ಮೂಲದಿಂದರೇ ಬರಲಿ
ಧೈರ್ಯ ಮತ್ತು ಆತ್ಮವಿಶ್ವಾಸ ತುಂಬುವಂತಿರಬೇಕು

ಸಖಿ,
ಕಷ್ಟಗಳು ಆಕಸ್ಮಿಕವಾಗಿಯೇ
ಆಪ್ತವಾಗುತ್ತವೆ.
ಅವುಗಳನ್ನು ಗೆಲ್ಲುವ
ಶಕ್ತಿಯೇ
ನಾವು ಕಲಿತ ಜ್ಞಾನ.
_ಅಂಕುರ

ಜ್ಞಾನದಲ್ಲಿ ಭೇದವುಂಟಾದರೆ
ಮನಸ್ಸು ಮೂರ್ಖಗೊಳ್ಳುತ್ತದೆ

ಮೂರ್ಖ ಮನಸ್ಸುಗಳೇ,
ಹೆಣ್ಣು-ಗಂಡು
ಬೇಧ ಹುಡುಕುವಾಗಲೇ
ಸೋತಿದ್ದೀರಿ, ಆಳ್ವಿಕೆ ಮಾಡುತ್ತಿದ್ದೀರಿ.
ಒಂದೇ ಜೀವದೊಳಗಿನ
ಆತ್ಮಗಳಿಗೆ, ಬೇಧವಿನ್ನೆಲ್ಲಿಯದು.
-ಅಂಕುರ



ಛಲವಿದ್ದರೆ ತಾವರೆಯಂತೆ
ಎಷ್ಟೇ ಆಳವಾದರೂ ಎಚ್ಚರವಾಗಿ ಅರಳುತ್ತೇವೆ





ಸಖಿ,
ತಾವರೆಯ ತಾಳ್ಮೆ ನಿನ್ನದು
ಇರುವಷ್ಟು ಕಾಲ
ನಿನ್ನ ತುಂಬಿರುವ
ತಂಪು ಕೊಳ ನಾನು
-ಅಂಕುರ

ಪ್ರೀತಿಯ ಬೇರು ಆಳವಾದಷ್ಟೂ
ಪ್ರೇಮದ ವೃಕ್ಷ ಭದ್ರವಾಗುತ್ತದೆ

ಸಖಿ,
ನೀ ಎನ್ನ ವಕ್ಷದ ಮೇಲೆ
ವಿಶ್ವವನ್ನು ತುಂಬಿದಂತೆ
ಆವರಿಸಿದ ದಿನವೇ
ನನಗೆ ನೆಮ್ಮದಿಯ ಉಸಿರು.
-ಅಂಕುರ





ಯಾವುದೇ ಕೆಲಸವಾಗಲಿ
ತೃಪ್ತಿ ಇದ್ದರೆ ಸ್ವರ್ಗ
ಅದುವೆ ದೇವರ ಕೆಲಸ

ಸಖಿ,
ಮನದ ಮಂದಿರಲ್ಲಿ
ನೀನು ನಾನು ನಿಜ ಶರಣರು
ಕಾಯಕವೇ ನಮಗೆ ದೇವರು.
-ಅಂಕುರ



ಬದುಕೇ ಹೀಗೆ ಅಪೂರ್ಣ
ಪೂರ್ಣಗಳ ಲೆಕ್ಕಾಚಾರ

ಸಖಿ,
ಎಲ್ಲಿಯದೋ ಆಪ್ತತೆಯನ್ನು
ಹಳತು ನಂಟುಗಳನ್ನು
ಅಳವಡಿಸಿ, ಅಳಸುವ ಮುನ್ನ
ನಮ್ಮದೇ ಹೊಸ ಪ್ರೀತಿ ಸೃಷ್ಟಿಸೋಣ,
ಜೀವನ ಪ್ರೀತಿಗೆ ನಾಂದಿಯಾಡೋಣ.
-ಅಂಕುರ





ಪ್ರತಿ ಸೃಷ್ಟಿಯೂ
ಒಂದು ಕಾರ್ಯದ ಸಂಕೇತ
ಅದನ್ನು
ಕಾಣುವ ನೋಟದಲ್ಲಿಯೇ
ಅದರ ಚೈತನ್ಯದ ಅರಿವಿದೆ.



ಸಖಿ,
ಭಾವ ಬಂಧುರಕೆ
ಆಕಾರ ಮುಖ್ಯವಲ್ಲ,
ಸ್ವೀಕಾರ ಮುಖ್ಯ.
-ಅಂಕುರ

ಸಖಿ,
ಪಡೆಯುವುದಕ್ಕಿಂತ
ಹೆಚ್ಚು ನೀಡುತ್ತಾ ಸಾಗೋಣ..
ನೀಡಿದ್ದಕ್ಕಿಂತಲೂ
ಹೆಚ್ಚು ಪಡೆದಿರುತ್ತೇವೆ.
ಇದುವೆ ನಮ್ಮೊಲವು!
-ಅಂಕುರ

ನೀಡುವ ಸುಖದಲ್ಲಿ
ಪಡೆಯುವ ಭಾಗ್ಯವು
ಕಾಣ್ಕೆಯಾಗಿ ಲಭಿಸುತ್ತದೆ.





ಸಖಿ,
ಪ್ರೀತಿಯಲಿ ಬೆರೆತು,
ಪ್ರೇಮವನು ಮರೆತ
ಎಲ್ಲಾ ಸಖ-ಸಖಿಯರಿಗೂ
ನಾವು ಹೊಸ ಅಧ್ಯಾಯ
ಪ್ರೇಮದ ಆತ್ಮದರ್ಪಣ.
-ಅಂಕುರ



ಸಖಿ,
ಇರುವಷ್ಟು, ಇರುವಂತೆಯೇ
ಪ್ರೀತಿಸುವುದು
ನಮ್ಮ ಆಯ್ಕೆ
ಅದೇ ಸಖ್ಯದ ಯೋಗ!
-ಅಂಕುರ



**ಗೊತ್ತಿರುವ ಸಂಗತಿಗಳನ್ನು**

**ಗೆಲ್ಲುವುದೇ**

**ನಿಜವಾದ ಸಾಹಸ**

**ಹಾಗೂ**

**ಆತ್ಮತೃಪ್ತಿ**



***ಸಖಿ ಶಾರದೆ***

***56***

ಸಖಿ,

ಸುಖದ ನಲ್ಮೆ-ದುಃಖದ ಗೆಲ್ಮೆ

ಅರಿತ ಕಾರಣ ನಾವು

ಸಖ-ಸಖಿ

-ಅಂಕುರ



ಸಖಿ,
ನೀನು ಪಡುವ ಖುಷಿ
ಪಡೆಯುವ ನೆಮ್ಮದಿ
ಎನ್ನ ತಾಯಿಯ ಹರಕೆ
ಅದುವೆ ಎನ್ನ ಬಯಕೆ.
-ಅಂಕುರ

**ಬದುಕಿನ ಗ್ರಹಿಕೆಗಳು**
**ನಂಬಿಕೆಯ ತಳಹದಿಯ**
**ಮೇಲೆ**
**ವಾಸ್ತವದ ಬೇರುಗಳನ್ನು**
**ಸದಾ**
**ಬಲಪಡಿಸುತ್ತವೆ.**





ಈ ಹುಡುಕಾಟಗಳು
ರೂಪ
ಸ್ವರೂಪದಲ್ಲಿ
ವಿಭಿನ್ನವಾದರೂ
ಗುರಿ ಒಂದೇ
ಆಗಿರುತ್ತದೆ



ಸಖಿ,
ಇಲ್ಲಿ ಎಲ್ಲರೂ ಹುಡುಕುತ್ತಿದ್ದಾರೆ!
ಒಲವು, ಪ್ರೇಮ ಹಾಗೂ ಆತ್ಮತೃಪ್ತಿ.
- ಅಂಕುರ



ಎಲ್ಲಿ ನಮ್ಮ ಸಾಕ್ಷಿಪ್ರಜ್ಞೆಗಳು
ನಿಸ್ವಾರ್ಥಗೊಳ್ಳುತ್ತವೆಯೋ
ಅಲ್ಲಿ ಪೂರ್ವದ ನಂಬಿಕೆಗೆ
ಅರ್ಥವಿರುತ್ತದೆ.

ಸಖಿ,
ನುಡಿಯ ಒಡನಾಟಕೆ,
ಮೊದಲು.
ಮನದ ಸಂಗಾತಕೆ,
ಜನ್ಮಜನ್ಮಾಂತರದ ನಂಟು...
ನೀ ನನ್ನ ಸಾಕ್ಷಿಪ್ರಜ್ಞೆ.
-ಅಂಕುರ

ಎಲ್ಲರೂ ಹಲವು
ಪ್ರೇಮಗಳ ಬಲೆಯಲ್ಲಿ
ನಿತ್ಯವೂ
ಸಂಗಾತಗೊಂಡಿರುತ್ತಾರೆ
ಅದರ  ಆಳಕ್ಕಿಳಿದವರು ಮಾತ್ರ
ಹುಚ್ಚರಂತೆ ಅಲೆಯುತ್ತಾರೆ



ಸಖಿ,
ನಿತ್ರಾಣದಲ್ಲೂ
ತಂಪು ತ್ರಾಣ ನೀನು
ಕಾರಣ
ಪ್ರೇಮದ ಬೆಸುಗೆ.
-ಅಂಕುರ

ಅನಿಸು



ಅನಿಸು
ಹನಿಸಿದರೆ
ಮನಸ್ಸು
ಮೃದುವಾಗುತ್ತದೆ



ಸಖಿ,
ಎನ್ನ ಕಮಲಮುಖಿಯೇ
ನಿನ್ನ ದಳದಲ್ಲಿ ಬಿಂದುವಾಗಿ
ಜಾರಿ, ಹೃದಯದಲ್ಲಿ ಇಳಿದೆ
ಜೊತೆಯಲ್ಲಿ ಕಮಲಸುಖಿಯಾದೆ.

-ಅಂಕುರ



ಈ ಪ್ರೇಮವು
ನೀರಿನಂತೆ
ವಿಶಾಲ
ಆಳ
ಪರಿಶುದ್ಧ ಸಾರ ವಿಚಾರ

ಸಖಿ,
ನಾವು ಅಕ್ಷರ ಕಲಿತವರು
ನಮ್ಮ ಆಲೋಚನೆಗಳು,
ನಾಳೆಗೂ ಅರ್ಥವಿರಬೇಕು.
ಈ ಪುಟ್ಟ ಬದುಕು
ಸಾರ್ಥಕವಾಗಬೇಕು.

-ಅಂಕುರ



ಧ್ಯಾನವೂ
ಫಲಿಸುತ್ತದೆ
ಮನಸ್ಸು
ಪರಿಶುದ್ಧವಾಗಿರಲು



ಸಖಿ,
ಪ್ರೇಮಕೆ
ಕಾರಣ
ನೀನು!
-ಅಂಕುರ

-ಸಖಿ ಶಾರದೆ




**ಪರಿಪಕ್ವತೆಗಾಗಿ
ಹಂಬಲಿಸುವ
ಪ್ರತಿ ಮನಸ್ಸೂ
ಪರಿಶುದ್ಧತೆಗಾಗಿ
ಧ್ಯಾನಿಸಬೇಕಿದೆ**

# ಮೌನವೇ ಎಲ್ಲಕ್ಕೂ ಮೊದಲ ಬೀಗಮುದ್ರೆ



ಸಖಿ ಶಾರದೆ
65

ಸಖಿ,
ಕವಿಮನಕೆ
ಕಿವಿಯಾದೆ
ಇಲ್ಲಿ
ಮಾತೆಲ್ಲವೂ ಮೌನ!
- ಅಂಕುರ

-ಸಖಿ ಶಾರದೆ

ಸಖಿ,
ಇಷ್ಟಗಳು
ಗಳಿಸಿಕೊಂಡ ಅರ್ಥಸಾರ
ಕಷ್ಟಗಳು
ಬೆಳಸಿಕೊಂಡ ಪದಭಾರ!
-ಅಂಕುರ




ಸಖಿ,
ಲೋಕದ ನೋಟ
ಹೇಗಾದರೂ ಇರಲಿ,
ನಮ್ಮ ಮನದ
ತೋಟ ಸುಂದರವಾಗಿದೆ.
-ಅಂಕುರ






ಸಖಿ ಶಾರದೆ
68

ಸಖಿ,
ಉಳಿದದ್ದೇ
ಉಗಾದಿ...
-ಅಂಕುರ

-ಸಖಿ ಶಾರದೆ

ಸಖಿ,
ನಾನಿರುವೆ
ನಿನ್ನೆಲ್ಲಾ ಪ್ರಶ್ನೆಗಳಿಗೆ
ಉತ್ತರವಾಗಿ..
ಹತ್ತಿರವಾಗಿ..
ಮನದ ಬಿತ್ತರವಾಗಿ..
-ಅಂಕುರ

-ಸಖಿ ಶಾರದೆ



ಸಖಿ,  
ನಾ ಮೇಲು, ನೀ ಮೇಲು  
ಏನಿಲ್ಲವೆಂಬ ಸತ್ಯ  
ಜಗಕೆ ತಿಳಿದಿದೆ ಅರ್ಥ.  
ಆದರೂ ಏರಿಳಿತ  
ತಪ್ಪಿಲ್ಲ ನೋಡು.  
ನಾವು ಸಮ ಬಿಂದುಗಳು  
ಆತ್ಮ ಬಂಧುಗಳು.  
-ಅಂಕುರ

ಸಖಿ,
ಸವಿದಷ್ಟು ಸಿಹಿಯು
ಬಾಳ್ವೆಯ ಬೆಳಕು.
ಕತ್ತಲೆಯು ಕನಸಲ್ಲ,
ನಿತ್ಯ ಗೆಲುವಿನ ದಾರಿ.
ನಮ್ಮ ನಿತ್ಯಾತ್ಮ
ಈಗ ಸುಪ್ತದೀಪ್ತಿ.
-ಅಂಕುರ

ಸಖಿ,
ಸ್ವಾತಂತ್ರ್ಯವೆಂದರೆ
ಸ್ವಯಂ ಸಂವೇದನೆಯಲ್ಲ,
ಆತ್ಮ ನಿವೇದನೆ
ನಾವು ಆತ್ಮ ಮಿತ್ರರು.
-ಅಂಕುರ

ಸಖಿ,
ಕಾಣ್ವ ಕನಸಿನ ಸುಖವು
ಬಾಳ್ವೆಗೆ ಬೆಳಕಾಗುವುದಾದರೆ
ನಾನು ನಿನ್ನ ನೀನು ನನ್ನ
ಭಕ್ತಿ ಸ್ವರೂಪಿ.
-ಅಂಕುರ

ಸಖಿ,
ನಮ್ಮೀ ಬದುಕು
ಜಗತ್ತಿಗೆ
ಕಾಣಿಸುವುದಕ್ಕಾಗಿಯಲ್ಲ
ನಾವೇ ಕಾಣುವುದಕ್ಕಾಗಿ
ರೂಪುಗೊಂಡಿದೆ.
-ಅಂಕುರ



ಸಖಿ,
ಎಲ್ಲರಂತಲ್ಲದ
ನಮ್ಮ ಮಾತಿದು ಸತ್ಯ
ಎಲ್ಲರಿಗೂ ಮಾದರಿ
ನಮ್ಮ ಬದುಕು ನಿತ್ಯ
-ಅಂಕುರ

ಸಖಿ,
ಬಡತನವು
ಕಲಿಸುವ
ಪ್ರೀತಿಯಲ್ಲಿ
ನಿತ್ಯ ಹಸಿವಿದೆ.
-ಅಂಕುರ



ಸಖಿ,
ಬದಲಾಗದವರಲ್ಲಿ
ಬದಲಾವಣೆಗಳನ್ನು
ಬಯಸಬಾರದು.
ಬಯಕೆ ಅವರ ಆಯ್ಕೆ
-ಅಂಕುರ


ಸಖಿ ಶಾರದೆ
78
ಸಖಿ,
ಹೆಣ್ಣು
ಭೋಗದ ವಸ್ತುವಲ್ಲ,
ಆಕೆ
ಯೋಗದ ಶಿಸ್ತು.
-ಅಂಕುರ

ಸಖಿ,
ಪ್ರೀತಿಯನ್ನು
ಮರೆಯುವುದೆಂದರೆ...
ದೇಹದಿಂದ
ಜೀವ ಇಲ್ಲವಾದಂತೆ...
- ಅಂಕುರ

ಸಖಿ,
ಪ್ರೀತಿಸುವುದು
ಆತ್ಮ ಸಂವೇದನೆ
ಶಾಂತಿಯ
ಮೊದಲ ಹೆಜ್ಜೆ.
- ಅಂಕುರ

ಸಖಿ,
ನಿನ್ನ ಪುಸ್ತಕದಿ ಬರಹ ನಾನು
ನನ್ನ ಮಸ್ತಕದಿ ವಿರಹ ನೀನು

ಅಂಕುರ

ಸಖಿ,
ನಿನ್ನ ಸನಿಹದ ಸೌಂದರ್ಯಕೆ
ಭಾವ ಕಂಪನವಾಗಿದೆ
ಹಿಮಮಣಿಯೇ
ಮುತ್ತಿನಾರವಾಗಿ
ಬಿತ್ತರಗೊಂಡಿದೆ
-ಅಂಕುರ

ಸಖಿ,
ಜೀವನ ಒಂದು ಆಟವಂತೆ
ತಾಳ್ಮೆ, ಸಹನೆ, ಪ್ರೀತಿಯು
ಅದರ
ಗೆಲುವು ಸೋಲುಗಳನ್ನು
ಕಲಿಸುತ್ತದೆ.
- ಅಂಕುರ

ಸಖಿ,

ನೀ ಎಷ್ಟು ಸಲ
ನಿನ್ನ ಶೈಲಿಯನ್ನು ನೀನು
ಅನುಕರಿಸುವೆಯೋ
ನಾ ಅಷ್ಟು ಸಲ
ನಿನ್ನೊಳಗೆ ಜೀವಂತ
ಅಂಕುರ



ಸಖಿ ಶಾರದೆ
85



ಸಖಿ,
ಪ್ರೀತಿ ಕಲಿಸುವಂತಹ
ಪಾಠಗಳು
ಜಗತ್ತಿನಲ್ಲಿ ಯಾವ ಭಾವಗಳೂ
ಕಲಿಸುವುದಿಲ್ಲ.
ಪ್ರೀತಿ ಮನದ
ಮೊದಲ ವಿಶ್ವವಿದ್ಯಾಲಯ
- ಅಂಕುರ

ಸಖಿ ಶಾರದೆ

ಸಖಿ,

ಕನಸುಗಳೇ ಹೀಗೆ
ಬಣ್ಣಬಣ್ಣವಾಗಿ
ಬಂದು ನಿಲ್ಲುತ್ತವೆ
ಕಣ್ಣು ತೆರೆಯುವ ಶಕ್ತಿ ನಮ್ಮದು

ಅಂಕುರ



ಸಖಿ,
ಆಕಾರದಲ್ಲಿ ಆಯ್ಕೆಯಲ್ಲ
ದೃಷ್ಟಿಯಲ್ಲಿ
ಹೊಸ ಸೃಷ್ಟಿಯೇ
ಕಾಣಬಹುದು
ಕಣ್ಣು ತೆರೆಯೋಣ ಬಾ
ಕತ್ತಲೆಯ ಕಾನನದಿ
ಅಂಕುರ

ಸಖಿ ಶಾರದೆ

ಸಖಿ ಶಾರದೆ
89

ಸಖಿ,
ಗೆದ್ದಿದ್ದೇವೆ
ಎಂಬ ಎಲ್ಲಾ ತೃಪ್ತಿಗಳಲ್ಲೂ
ಸೋಲುಗಳ
ದುಃಖವೇ ತುಂಬಿರುತ್ತದೆ.
ಸೋಲಿಸುವ ಗೆಲುವು ಗೆಲುವಲ್ಲ
ಅದೊಂದು ಹಿಂಸೆ.
-ಅಂಕುರ

ಸಖಿ,

ಸುಂದರವಾದ ಪ್ರಯಾಣವನ್ನೂ

ನಿತ್ಯ ನೂತನಗೊಳಿಸಬೇಕಿದೆ

ಕನಸುಗಳೂ

ಪೂರ್ವ ಕಥೆಯನ್ನು ಹೇಳಬಹುದು

ಗುರಿ ಮಾತ್ರ ವಾಸ್ತವದ ಸಂಕೇತ

ಅಂಕುರ

ಸಖಿ ಶಾರದೆ

ಸಖಿ,

ಮುಖಾಮುಖಿಯಾಗಿ

ಕುಳಿತು

ಮೌನದಲಿ ಮಾತಾಡೋಣ

ಬಾ

ಮನದ ಎಲ್ಲಾ ಪ್ರಶ್ನೆಗಳಿಗೂ

ಕಣ್ಣುಗಳೇ ಉತ್ತರಿಸುತ್ತವೆ.

-ಅಂಕುರ

ಸಖಿ,
ಎಷ್ಟೋ ಸಲ ಈ ನೋಟ
ಕ್ಲಿಷ್ಟವಾಗಬಹುದು
ಮನಸ್ಸು ತೆರೆದು
ಇತಿಹಾಸ ನೆನೆದು ನೋಡು
ಎಲ್ಲವೂ ಸ್ಪಷ್ಟವೆ.
ಅಂಕುರ

ಸಖಿ ಶಾರದೆ
92

ಸಖಿ,

ನೀ

ನಿರ್ಮಲ

ಸ್ವಚ್ಛಂದ ಚಿಗುರು

ನಾ ಅದರ ಬೇರು

ನಾ ನೀ

ನಮ್ಮೊಳಗಿನ

ಆತ್ಮಸುಖಿಗಳು

ಅಂಕುರ



ಸಖಿ ಶಾರದೆ

93


ಸಖಿ,
ನಾವೆಲ್ಲರೂ ಕಾರ್ಮಿಕರೇ
ತಿಳಿದಷ್ಟು
ಗುತ್ತಿಗೆದಾರನ ಕೆಲಸ
ಉಳಿದಷ್ಟು ಬಂಡವಾಳದಲ್ಲಿ.
ಅಂಕುರ

ಸಖಿ,
ನಮ್ಮಿಷ್ಟದಲ್ಲಿ
ನಿಸ್ವಾರ್ಥವಿರುವ
ನೆಮ್ಮದಿ ನಮ್ಮದು
ಉಳಿದ ಬಣ್ಣದ ಮಾತುಗಳು
ಸುತ್ತಲಿ ಬಿಡು
ಅದುವೆ ರಂಗಿನಾಟ.
ಅಂಕುರ








ಸಖಿ,

ಕಣ್ಣಳತೆಯೂ
ನಿನ್ನಷ್ಟೇ ಮಧುರ
ಕಾಣುವಂತೆ ಕಾಣ್ಕೆ
ಅಂಕುರ

ಸಖಿ,
ಕಾಣುವುದೆಲ್ಲಾ ಸಂಭ್ರಮವೆಂದು
ಭಾವಿಸುವ ನೋಟದೊಳಗೆ
ಎಷ್ಟೆಲ್ಲಾ ದುಃಖ, ಕ್ರಾಂತಿಗಳೂ
ನಿತ್ಯ ಬೆರೆತು ಬೆವರುತ್ತಿರಬಹುದು
ಅಂಕುರ

ಸಖಿ ಶಾರದೆ

ಸಖಿ,

**ಬದುಕು ಬೊಂಬೆಯಾಟ**
**ಜೀವ ತುಂಬುವುದು**
**ಆಟಗಾರರ ಕಲೆ**
**ಇದು ಮುಖಾಮುಖಿ ಶಾಲೆ**

**ಅಂಕುರ**





ಸಖಿ,

**ನಂಬಿಕೆಯ ಬಲವು**
**ವಿನಾಶವನ್ನೂ**
**ಚಿಗುರಿಸುತ್ತದೆ**
**ಆತ್ಮತೃಪ್ತಿಗೆ ಇದುವೆ ಹಾದಿ**
**ಅಂಕುರ**

**ಸಖಿ ಶಾರದೆ**

*99*




ಸಖಿ,
ನಾವೀ ಕೃತಿಕಾರರು
ಕೃತಿಯೇ
ನಮ್ಮೀ ಬದುಕು
ಪ್ರತಿ ದಿನವೂ ಪ್ರತಿ ಅಧ್ಯಾಯದ
ಹೊಸ ಅರ್ಥಶಾಲೆ.
ನೀ ನನ್ನೊಳಗಿನ ಶಾರದೆ
-ಅಂಕುರ

-ಸಖಿ ಶಾರದೆ

ಸಖಿ ಶಾರದೆ
100

ಇಲ್ಲಿನ ನೂರು ಚಿತ್ರ ಸಾರ ವಿಚಾರಗಳು ಮನದ ಪದೋಕ್ತಿಗಳು. ಇಲ್ಲಿ ವ್ಯಾಖ್ಯಾನ, ನಿರ್ದೇಶನ, ಕಾವ್ಯಮೀಮಾಂಸೆ,ಸಂಶೋಧನೆ ಮೊದಲಾದಂತೆ ಏನೂ ಇಲ್ಲ. ಅರ್ಥವಾದರೆ ಎಲ್ಲವೂ ಇರಬಹುದು.

ಈ ಬದುಕಿಗಾಗಿ ಎಷ್ಟೆಲ್ಲಾ ಶ್ರಮಿಸುತ್ತೇವೆ. ಸುಲಭಮಾರ್ಗದಲ್ಲಿ ಗೆಲುವನ್ನು ಹಂಬಲಿಸುತ್ತೇವೆ. ಕಾಣುವ ಕಥೆಯೆಲ್ಲಾ ಚಿತ್ರಕಥೆಯಲ್ಲ. ಜೊತೆಯಿಲ್ಲದ ಬನವನ್ನು ಭೇದಿಸಲು ನಾಲ್ಕು ದಿಕ್ಕು ಸುತ್ತುವ ನಮಗೆ, ಜೊತೆಯಿರುವ ಮನವು ಕಾಣಿಸುತ್ತಿಲ್ಲ. ಚಿಂತೆ, ನೋವು, ದುಃಖ, ಭಯ ಎಲ್ಲಕ್ಕೂ ಕಾರಣ ಈ ಮನಸ್ಸು.

ಮನಸ್ಸು ಅರ್ಥವಾಗದೆ, ಮಾಡಿದ ಕಾರ್ಯವೆಲ್ಲವೂ ವ್ಯರ್ಥ. ಮೊದಲು ನಮಗೆ ನಾವು ಅರ್ಥವಾಗಬೇಕಿದೆ. ನಾವು ಸಾಧಿಸಿರುವುದು ಯಾವ ರೀತಿಯ ನೆಮ್ಮದಿ ಪರಿಶೀಲಿಸಿಕೊಳ್ಳಬೇಕಿದೆ. ನಾವು ಇನ್ನೂ ನೆಮ್ಮದಿಯನ್ನು ಅರಸುತ್ತಿದ್ದೇವೆ ಎಂದರೆ ಮನಸ್ಸು ಹದಗೊಂಡಿಲ್ಲವೆಂದರ್ಥ. ನಮ್ಮೊಳಗಿನ ಸಖ ಸಖಿ ಭಾವವನ್ನು ತಿಳಿದು ತಿಳಿಗೊಳಿಸಬೇಕಿದೆ. ಅಂತಹ ಪ್ರಯತ್ನಕ್ಕೆ ಈ ಸಖಿ ಶಾರದೆ ನೆರವಾಗಬಹುದು. ಬಿಡುವಲ್ಲಿ ಓದಿ, ಸುಖಿಸಿ.

_ ಅಂಕುರ



ಚಿತ್ರ ವಿಚಾರ ಕೃತಿ

ಜೀವನ ಪ್ರೀತಿ ಮಾಲಿಕೆ ೬

ಪರಸ್ಪರ ಗೌರವಿಸಿ, ಪ್ರೀತಿಯಿಂದ ನಡೆದರೆ ಸಖ ಸಖಿಯರ ಜೀವನ ಸಾರ್ಥಕ. ಈ ಚಿತ್ರಕೃತಿಯು ಜೀವನದ ಪ್ರಮುಖ ವಿಚಾರಗಳನ್ನು ಆಕರ್ಷಕ ರೀತಿಯಲ್ಲಿ ಚರ್ಚಿಸಿ, ಓದುಗರಿಗೆ ಸುಂದರ ಪದಗಳ ಮೂಲಕ ನೀಡಲಾಗಿದೆ. ನಾವು ಕಾರಣ ಕಾರ್ಯದಲ್ಲಿ ಕಂಡುಬಂದರೂ ಸಹೃದಯರಾದ ನೀವು ಅದರ ಫಲಾನುಭವಿಗಳು.

ಶುಭಹರಕೆ _ ಕಾವ್ಯ



ಜೀವನ ಪ್ರೀತಿ


ISBN 978-93-5773-793-7
9 789357 737937 >

ಸಖಿ ಶಾರದೆ

